# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 676
ಸದಸ್ಯರ ಹೆಸರು ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ 17-09-2021.
ಉತ್ತರಿಸುವವರು ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಗ್ರಾಮಗಳು ಜನಸಂಖ್ಯೆಯ ಹೆಚ್ಚಳದಿಂದ ವಿಸ್ತಾರಗೊಂಡು ಜನರು ಗ್ರಾಮಗಳ ಸಮೀಪದ ತಮ್ಮ ತಮ್ಮ ಹೊಲ ಗದ್ದೆಗಳಲ್ಲಿ ಮನೆ ಕಟ್ಟಿಕೊಂಡು ವಾಸಿಸುತ್ತಿರುವ ಇವರಿಗೆ ಗ್ರಾಮ ಪಂಚಾಯತಿಗಳಿಂದ ಯಾವುದೇ ಮೂಲಭೂತ ಸೌಲಭ್ಯಗಳ ಅನುಕೂಲ ಇಲ್ಲದೇ ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಹಾಗಿದ್ದಲ್ಲಿ, ಈ ರೀತಿ ಗುಂಪು ಗ್ರಾಮ ಠಾಣಾ ವ್ಯಾಪ್ತಿಯ ಹೊರಗೆ ವಾಸಿಸುತ್ತಿರುವ ಇವರಿಗೆ ಅಗತ್ಯ ಮೂಲಭೂತ ಸೌಕರ್ಯ ಕಲ್ಪಿಸುವ ನಿಟ್ಟಿನಲ್ಲಿ ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಗ್ರಾಮ ಪಂಚಾಯತಿಗಳು ಲಭ್ಯವಿರುವ ಅನುದಾನದಲ್ಲಿ ರಸ್ತೆ, ಕುಡಿಯುವ ನೀರು, ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿರುತ್ತಾರೆ. ಗ್ರಾಮ ಪಂಚಾಯತಿಯಿಂದ ರೈತರ ಹೊಲಗಳಿಗೆ ಹೋಗಲು ಎಮ್.ಜಿ.ಎನ್.ಆರ್.ಇ.ಜಿ.ಎ ಯೋಜನೆಯಡಿ ಶೇ. 10 ರಷ್ಟರಲ್ಲಿ ಗ್ರಾಮ ಪಂಚಾಯತಿಗಳು ರಸ್ತೆಯನ್ನು ನಿರ್ಮಾಣ ಮಾಡಬಹುದಾಗಿರುತ್ತದೆ. ರೈತರು ವಿದ್ಯುತ್ ಸಂಪರ್ಕವನ್ನು ಕಲ್ಪಿಸಿಕೊಂಡಿರುವುದರಿಂದ ಗ್ರಾಮ ಪಂಚಾಯತಿ ವತಿಯಿಂದ ಮೂಲಭೂತ ಸೌಲಭ್ಯಗಳನ್ನು ಅನುದಾನದ ಲಭ್ಯತೆಯನುಸಾರ ಕಲ್ಪಿಸಿರುತ್ತಾರೆ. |
| ಇ | ಗ್ರಾಮ ಪಂಚಾಯತಿಗಳಿಗೆ ತೆರಿಗೆ ಭರಿಸಲು ಸಿದ್ಧವಿರುವ ಇವರಿಗೆ ಅಗತ್ಯ ಮೂಲಭೂತ ಸೌಕರ್ಯಗಳನ್ನು ಯಾವ ಕಾಲ ಮಿತಿಯಲ್ಲಿ ಕಲ್ಪಿಸಲಾಗುವುದು; (ವಿವರ ನೀಡುವುದು) | |
| ಈ | ಬೆಳಗಾವಿ ಜಿಲ್ಲೆಯ ಎಷ್ಟು ಗ್ರಾಮ ಪಂಚಾಯತಿಗಳಲ್ಲಿ ಈ ಸಮಸ್ಯೆಯಿದೆ; (ತಾಲ್ಲೂಕುವಾರು ವಿವರ ಒದಗಿಸುವುದು) | ಬೆಳಗಾವಿ ಜಿಲ್ಲೆಯ ಬಹುತೇಕ ಗ್ರಾಮ ಪಂಚಾಯತಿಗಳಲ್ಲಿ ಸಮಸ್ಯೆ ಇರುತ್ತದೆ. |
| ಉ | ಗ್ರಾಮ ಠಾಣಾ ವ್ಯಾಪ್ತಿಯ ಹೊರಗಿರುವ ಈ ಕುಟುಂಬಗಳನ್ನು ಗ್ರಾಮ ಪಂಚಾಯತಿಯ ವ್ಯಾಪ್ತಿಯೊಳಗೆ ತಂದು ಅವರಿಗೆ ಮೂಲಭೂತ ಸೌಲಭ್ಯ ಕಲ್ಪಿಸಲು ಸರ್ಕಾರ ಏನು ಕ್ರಮಗಳನ್ನು ಕೈಗೊಳ್ಳಲಿದೆ? (ವಿವರ ಒದಗಿಸುವುದು) | ಗ್ರಾಮ ಪಂಚಾಯತಿಗಳು ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ಬಿಡುಗಡೆ ಮಾಡುವ ಅನುದಾನ, ಸ್ವಂತ ಸಂಪನ್ಮೂಲದಿಂದ ಗ್ರಾಮಠಾಣಾ ವ್ಯಾಪ್ತಿಯ ಹೊರಗಿರುವ ಕುಟುಂಬಗಳಿಗೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿಕೊಳ್ಳಬಹುದಾಗಿದೆ. |

ಸಂ. ಗ್ರಾಅಪ 331 ಗ್ರಾಪಂಅ 2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.